CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೦೩ (ಪುಷ್ಯ ೪, ಶಕ ವರ್ಷ ೧೯೨೫) | ಸಂಚಿಕೆ ೫೧ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 16 ಎಂಎಂಸಿ 2003, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2003**

ಬೆಂಗಳೂರು ವೈದ್ಯಕೀಯ ಕಾಲೇಜಿನ ನೇತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರಾದ ಮತ್ತು ಮಿಂಟೋ ಕಣ್ಣಾಸ್ಪತ್ರೆಯ ವೈದ್ಯಕೀಯ ಅಧೀಕ್ಷಕರಾದ ಹಾಗೂ ಮಿಂಟೋ ಪ್ರಾದೇಶಿಕ ನೇತ್ರಚಿಕಿತ್ಸಾ ಸಂಸ್ಥೆಯ ಪ್ರಭಾರಿ ನಿರ್ದೇಶಕರಾದ ಡಾ: ಎ.ಆರ್. ಅರುಣಾ ರವರಿಗೆ ಅವರ ಸ್ವಂತವೇತನ ಮತ್ತು ಶ್ರೇಣಿಯ ಮೇಲೆ ಮಿಂಟೋ ಪ್ರಾದೇಶಿಕ ನೇತ್ರ ಚಿಕಿತ್ಸಾ ಸಂಸ್ಥೆಯ ನಿರ್ದೇಶಕರ ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬಡ್ತಿ ನೀಡಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1398

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

### ಅಧಿಸೂಚನೆ

**ಸಂಖ್ಯೆ: ಆಕುಕ 61 ಎಂಎಂಸಿ 2003, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2003**

1) ಬಳ್ಳಾರಿಯ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಶಿಶುವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಸೇವಾನಿರತರಾದ ಡಾ: ಎಂ. ವೀರಶಂಕರ್‌ರವರಿಗೆ ಜೇಷ್ಠತೆಯಲ್ಲಿ ಅವರಿಗಿಂತಲೂ ಕಿರಿಯರಾದ ಡಾ: ಸರ್ವಮಂಗಳಾ ರವರಿಗೆ ಸಹಾಯಕ ಪ್ರಾಧ್ಯಾಪಕ ಹುದ್ದೆಗೆ ಬಡ್ತಿ ನೀಡಿದ ದಿನಾಂಕದಿಂದ ಜಾರಿಗೆ ಬರುವಂತೆ ಶಿಶುವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಪನ್ನರಾಗಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 60ನೇ ನಿಯಮದಡಿ Proforma ಬಡ್ತಿ ನೀಡಿ ಅವರು ಸ್ವತಂತ್ರ ಪ್ರಭಾರದ ಮೇಲೆ ಹೊಂದಿದ್ದ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಶಿಶುವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

2) ಬೆಂಗಳೂರು ವೈದ್ಯಕೀಯ ಕಾಲೇಜಿನ ಶಿಶುವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರುವ ಡಾ: ಸರ್ವಮಂಗಳಾ ರವರಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಶಿಶುವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ಸ್ಥಾನಪನ್ನರಾಗಲು ಬಡ್ತಿ ನೀಡಿ ಮುಂದಿನ ಆದೇಶದವರೆಗೆ ಅವರು ಸ್ವತಂತ್ರ ಪ್ರಭಾರದಲ್ಲಿ ಹೊಂದಿದ್ದ ಶಿಶುವೈದ್ಯಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಯಲ್ಲಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1399

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಸಾಇ 348 ಪೊಸಿಪ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ಕಾಡುಗಳ್ಳ ವೀರಪ್ಪನನ್ನು ಹಿಡಿಯಲು ರಚಿಸಲಾದ ವಿಶೇಷ ಕಾರ್ಯಪಡೆಯ ಭದ್ರತಾ ಸಲಹೆಗಾರರಾದ ಶ್ರೀ ಟಿ. ಶ್ರೀನಿವಾಸಲು ರವರ ರಾಜಿನಾಮೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ವಿಶೇಷ ಕಾರ್ಯಪಡೆಯ ಉಸ್ತುವಾರಿ ಮತ್ತು ಅದಕ್ಕೆ ಸಂಬಂಧಿಸಿದ ಎಲ್ಲಾ ಕಾರ್ಯಗಳ ನಿರ್ವಹಣೆಯನ್ನು ಶ್ರೀ ಟಿ. ಮಡಿಯಾಳ್, ಐ.ಪಿ.ಎಸ್. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1400

**ಬಿ.ಎಂ. ಸಣ್ಣಲಿಂಗಣ್ಣವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಒಸಾಇ 62 ಸಶಾಶಾ 2003, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2003**

ಮಾನ್ಯ ಮುಖ್ಯಮಂತ್ರಿಯವರು ಜನಸ್ಪಂದನ ಕಾರ್ಯಕ್ರಮದಲ್ಲಿ ಸ್ವೀಕರಿಸಿದ ಮನವಿಗಳ ಬಗ್ಗೆ ತ್ವರಿತ ಕ್ರಮ ಕೈಗೊಳ್ಳಲು ಹಾಗೂ ಅನುಪಾಲನಾ ವರದಿ ಸಲ್ಲಿಸಲು ಒಳಾಡಳಿತ ಮತ್ತು ಸಾರಿಗೆ ಇಲಾಖೆಗೆ ಸಂಬಂಧಪಟ್ಟಂತೆ ಶ್ರೀ ಜಿ.ಕೆ. ಗುರಾಣಿ, ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಸಮನ್ವಯ) ದೂರವಾಣಿ ಸಂಖ್ಯೆ: 2370, ವಿಧಾನ ಸೌಧ, ಬೆಂಗಳೂರು ಇವರನ್ನು ನೋಡಲ್ ಅಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1401

**ಡಿ.ಪಿ. ಹುಲ್ಲಿಕೇರಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಮತ್ತು ಸಾರಿಗೆ ಇಲಾಖೆ.

## KARNATAKA GOVERNOR'S SECRETARIAT

### NOTIFICATION

**No. GS 6 AUD 2003, Bangalore, Dated 27th November 2003**

WHEREAS, the tenure of Dr. S.A. Patil, Vice-Chancellor, University of Agricultural Sciences, Dharwad, expires on 27th November 2003.

WHEREAS, a Committee was constituted under Sub-Section (2) of Section 12 of the Karnataka Universities of Agricultural Sciences Act, 1963, to recommend a panel of names for selection to the post of Vice-Chancellor, University of Agricultural Sciences, Dharwad.

WHEREAS, the panel of names recommended by the Selection Committee has been considered.

AND NOW, THEREFORE, in exercise of the powers conferred on me under section 12(2) of the Karnataka Universities of Agricultural Sciences Act, 1963, I, T.N. CHATURVEDI, Chancellor University of Agricultural Sciences, Dharwad, hereby appoint Dr. S.A. Patil, as Vice-Chancellor of University of Agricultural Sciences, Dharwad, for a period of three years with effect from 28.11.2003.

**T.N. CHATURVEDI**
Chancellor.

PR-1402

**C.S. SURANJANA**
Principal Secretary to Governor,

## ಕಾನೂನು ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಲಾ 23 ಎಲ್ಎಜಿ 2003, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2003**

ಸರ್ಕಾರದ ಇದೇ ಸಮಸಂಖ್ಯೆಯ ದಿನಾಂಕ: 6.11.2003 ರ ಅಧಿಸೂಚನೆಯಲ್ಲಿ ಶ್ರೀ ಬಿ.ಹೆಚ್. ಹರ್ಷ ಎಂದು ನಮೂದಾಗಿರುವುದನ್ನು ಶ್ರೀ ಬಿ.ಹೆಚ್. ಶ್ರೀಹರ್ಷ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1403

**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 116 ಸೇಇಮು 2003, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2003**

ಡಾ: ಎಸ್.ಎಂ. ಜಂಗೆ, ಅಪರ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ, ಇವರಿಗೆ ದಿನಾಂಕ: 1.12.2003 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ. 13820-17220 ರ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಹುದ್ದೆಗೆ ಸ್ಥಾನಪನ್ನರಾಗಲು ಬಡ್ತಿ ನೀಡಿ, ನಿರ್ದೇಶಕರು, ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ, ಬೆಂಗಳೂರು, ಹುದ್ದೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1404

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

### ಅಧಿಸೂಚನೆ

**ಸಂಖ್ಯೆ: ಸಿಆಸುಇ 344 ಆಸೇಇ 2003, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2003**

ಶ್ರೀ ಟಿ.ಎ. ಪಾರ್ಥಸಾರಥಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಹಾಲಿ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಬೆಂಗಳೂರು ಇವರು ದಿನಾಂಕ: 2.12.2003 ರಿಂದ 31.12.2003 ರವರೆಗೆ ಅಧ್ಯರ್ಪಿಸಿರುವ 30 ದಿನಗಳ ಗಳಿಕೆ ರಜೆಯನ್ನು ಒಪ್ಪಿಕೊಂಡು, ಕರ್ನಾಟಕ ನಾಗರೀಕ ಸೇವಾ ನಿಯಮ 118 ರಡಿ ಹಾಗೂ ಅನುಬಂಧ-ಸಿ ನಲ್ಲಿನ ನಿಬಂಧನೆಗಳಿಗನುಸಾರವಾಗಿ 2003-2004ನೇ ಸಾಲಿನ ಅವಧಿಯಲ್ಲಿ ಗಳಿಕೆ ರಜೆ ನಗದೀಕರಣಕ್ಕೆ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1405

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

### ಅಧಿಸೂಚನೆ

**ಸಂಖ್ಯೆ: ಸಿಆಸುಇ 326 ಸಅರ 2003, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2003**

ಶ್ರೀ ಹೆಚ್.ಎಸ್. ಕೆಂಪಣ್ಣ, ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ಇವರನ್ನು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಚಿಕ್ಕಮಗಳೂರು, ಹುದ್ದೆಗೆ ವರ್ಗಾವಣೆ ಮೇಲೆ ನೇಮಿಸಿರುವುದರಿಂದ ತೆರವಾದ ಹುದ್ದೆಯಲ್ಲಿ ದಿನಾಂಕ: 1.12.2003 ರಿಂದ ಜಾರಿಗೆ ಬರುವಂತೆ ಶ್ರೀ ಡಿಸೋಜ ರಾಬಿನ್‌ಸನ್, ವಿಶೇಷ ಕಾರ್ಯದರ್ಶಿ, ಕಾನೂನು ಇಲಾಖೆ, ಇವರನ್ನು ಮುಂದಿನ ಆದೇಶದವರೆಗೆ ಸದರಿ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1406

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

### ಅಧಿಸೂಚನೆ

**ಸಂಖ್ಯೆ: ಸಿಆಸುಇ 312 ಸಅರ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ಶ್ರೀ ಈ.ಎನ್. ಚವ್ಹಾಣ್, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ (ನೇಮಕಾತಿ ನಿರೀಕ್ಷಣೆಯಲ್ಲಿರುವ) ಸರ್ಕಾರದ ಅಧೀನ ಕಾರ್ಯದರ್ಶಿ, ಇವರಿಗೆ ದಿನಾಂಕ: 20.11.2003 ರಿಂದ 19.12.2003 ರವರೆಗೆ (ಉ.ದಿ.ಸೇ) 30 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1407

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

### ಅಧಿಸೂಚನೆ

**ಸಂಖ್ಯೆ: ಸಿಆಸುಇ 357 ಸಅಸೇ 2003, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2003**

ಅಧಿಸೂಚನೆ ಸಂಖ್ಯೆ: ಸಿಆಸುಇ 98 ಸೇಉನ್ಯಾ 2003, ದಿನಾಂಕ: 19.11.2003 ರಲ್ಲಿ ಶ್ರೀ ಜಾವೂದ್ ರಹೀಂ, ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ತುಮಕೂರು ಇವರನ್ನು ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ಕರ್ನಾಟಕ ಸರ್ಕಾರ

ಸಚಿವಾಲಯ ಹುದ್ದೆಗೆ ನೇಮಿಸಲು ಪ್ರಸ್ತಾಪಿಸಿ ಅವರ ಸೇವೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವಶಕ್ಕೆ ನೀಡಿರುವುದರಿಂದ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಹುದ್ದೆಯಲ್ಲಿ ಮರುಸ್ಥಳ ನಿಯುಕ್ತಿಗೊಳಿಸಲಾಗಿದೆ.

**ಭಾಗ-2**

ಅಧಿಸೂಚನೆ ಸಂಖ್ಯೆ: ಸಿಆಸುಇ 98 ಸೇಉನ್ಯಾ 2003, ದಿನಾಂಕ: 19.11.2003 ರಲ್ಲಿ ಶ್ರೀ ಹೆಚ್.ಎಸ್. ಕೆಂಪಣ್ಣ, ಜಿಲ್ಲಾ ನ್ಯಾಯಾಧೀಶರು ನಿಯೋಜನೆ ಮೇಲೆ ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರು ಇವರನ್ನು ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಚಿಕ್ಕಮಂಗಳೂರು ಇಲ್ಲಿಗೆ ವರ್ಗಾವಣೆ ಮೇಲೆ ನೇಮಿಸಿರುವುದರಿಂದ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಕಾರ್ಯದರ್ಶಿ ಕಾನೂನು ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಬೆಂಗಳೂರು ಹುದ್ದೆಯಿಂದ ಬಿಡುಗಡೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1408

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 185 ಸೇಇಮು 2003, ಬೆಂಗಳೂರು, ದಿನಾಂಕ: 28ನೇ ನವೆಂಬರ್ 2003**

ಅಧಿಸೂಚನೆ ಸಂಖ್ಯೆ: ಸಿಆಸುಇ 162 ಸೇಇಮು 2002 ದಿನಾಂಕ: 19.11.2003 ರನ್ವಯ ದಿನಾಂಕ: 31.3.2003 ರಂದು 58 ವರ್ಷಗಳ ವಯೋಮಿತಿ ತಲುಪಿ ನಿವೃತ್ತಿ ಹೊಂದಿರುವ ಡಾ: ಜಿ.ವಿ. ನಾಗರಾಜ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 15 ಎಸ್ಆರ್ಎಸ್ 97 ದಿನಾಂಕ: 20.9.1997 ರನ್ವಯ ನಿವೃತ್ತಿ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯನ್ನು 240 ದಿನಗಳ ಗರಿಷ್ಠ ಮಿತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮ 118-ಎ (1) ರಡಿ ಹಾಗೂ ಉಪನಿಯಮ (2) ರ ವ್ಯಾಪ್ತಿಗೊಳಪಟ್ಟು ನಗಧೀಕರಣಗೊಳಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1409

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 188 ಸಅಸೇ 2003, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003**

ಶ್ರೀ ಸೈಯದ್ ತಯ್ಯಬ್ ಅಲಿ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ದಿನಾಂಕ: 28.6.2003 ರಿಂದ 13.8.2003 ರವರೆಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ನೇಮಕಾತಿ ನಿರೀಕ್ಷಣೆಯಲ್ಲಿ ಕಾಯ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 8(15)(ಎಫ್)ರ ಅನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1410

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 104 ಸೇಉನ್ಯಾ 2003, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2003**

ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: ಜಿಒಬಿ (1) 1: 2003 ದಿನಾಂಕ: 22.11.2003 ರ ಅನ್ವಯ ಈ ಕೆಳಕಂಡ ಜಿಲ್ಲಾ ನ್ಯಾಯಾಧೀಶರ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಾನೂನು ಇಲಾಖೆಯ ವಶಕ್ಕೆ ನೀಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ಈಗ ಕೆಲಸ ಮಾಡುತ್ತಿರುವ ಜಾಗ | ವರ್ಗಾಯಿಸಿರುವ ಜಾಗ |
|---|---|---|
| 1 | ಶ್ರೀ ರುದ್ರಗೌಡ ಎಸ್. ಪಾಟೀಲ್ ಮೊದಲನೆ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ | ಪ್ರಿಸೈಡಿಂಗ್ ಅಧಿಕಾರಿ, ಕಾರ್ಮಿಕ ನ್ಯಾಯಾಲಯ, ಗುಲ್ಬರ್ಗಾ, ಇಲ್ಲಿ ಖಾಲಿ ಇರುವ ಸ್ಥಳಕ್ಕೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1411

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಪಸಂಮೀ 35 ಮೀಇಸೇ 2002, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2003**

ಶ್ರೀ ಕೆ.ಎಂ. ಮಲ್ಲಿಕಾರ್ಜುನ ಸ್ವಾಮಿ, ಸಹಾಯಕ ಮೀನುಗಾರಿಕೆ ನಿರ್ದೇಶಕರು (ಶ್ರೇಣಿ-1), ಚಿಕ್ಕಮಗಳೂರು ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವೇತನ, ಬಡ್ತಿ ಮತ್ತು ಪಿಂಚಣಿ ಕ್ರಮಬದ್ಧಗೊಳಿಕೆ) ನಿಯಮಾವಳಿ 1978ರ ನಿಯಮ 2(1)(ಎ) ರನ್ವಯ ಹಾಗೂ ಮೀಸಲಾತಿ ಬಿಂದುವಿನನ್ವಯ ಶ್ರೀ ಜನಕರಾಜ ಎಸ್. ಕೊಳಸೂರು, ಪ್ರಸ್ತುತ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯತ್, ರಾಯಚೂರು, ಇವರಿಗೆ ಬಡ್ತಿ ನೀಡಿದ ದಿನಾಂಕದಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ದಿನಾಂಕ: 2.8.2002 ರಿಂದ ವೇತನ ಶ್ರೇಣಿ ರೂ. 7400-13120 ರಲ್ಲಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರಾಗಿ ಸ್ಥಾನಪನ್ನ ಬಡ್ತಿ ನೀಡಲಾಗಿದೆ. ಮತ್ತು ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಚಿಕ್ಕಮಗಳೂರು ಇಲ್ಲಿಗೆ ಶ್ರೀ ಎಸ್.ಸಿ. ಕೃಷ್ಣಪ್ಪ, ಇವರ ವರ್ಗಾವಣೆಯಿಂದ ತೆರವಾಗಿರುವ ಹುದ್ದೆಯಲ್ಲಿ ನೇಮಿಸಲಾಗಿದೆ.

ಶ್ರೀ ಕೆ.ಎಂ. ಮಲ್ಲಿಕಾರ್ಜುನ ಸ್ವಾಮಿ, ಇವರ ಮುಂಬಡ್ತಿಯಿಂದ ಖಾಲಿಯಾಗಲಿರುವ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1), ಚಿಕ್ಕಮಗಳೂರು, ಹುದ್ದೆಗೆ ಪರ್ಯಾಯ ಪ್ರಭಾರ ವ್ಯವಸ್ಥೆಯನ್ನು ಮಾಡುವವರೆಗೆ ಸದರಿ ಹುದ್ದೆಯ ಕಾರ್ಯಭಾರವನ್ನು ಅವರೇ ನೋಡಿಕೊಳ್ಳಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1412

**ಪಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಇಡಿ 77 ಡಿಜಿಪಿ 2003, ಬೆಂಗಳೂರು, ದಿನಾಂಕ: 28ನೇ ನವೆಂಬರ್ 2003**

ಸಾರ್ವಜನಿಕ ಶಿಕ್ಷಣ ಇಲಾಖೆಯ ಈ ಕೆಳಗೆ ಕಾಣಿಸಿದ ಲಿಪಿಕ ವೃಂದದ ಗ್ರೂಪ್-ಬಿ ಅಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958ರ ನಿಯಮ 95(1) ರಂತೆ ಅವರ ಹೆಸರಿನ ಎದುರು ಕಾಣಿಸಿದ ದಿನಾಂಕಗಳಿಂದ ಸೇವೆಯಿಂದ ವಯೋ ನಿವೃತ್ತಿ ಹೊಂದಲು ಅನುಮತಿಸಿದೆ.

| ಕ್ರಮ ಸಂಖ್ಯೆ | ಹೆಸರು, ಪದನಾಮ ಮತ್ತು ಸ್ಥಳ | ಜನ್ಮ ದಿನಾಂಕ | ನಿವೃತ್ತಿ ದಿನಾಂಕ | ಷರಾ |
|---|---|---|---|---|
| | ಶ್ರೀಮತಿ:ಶ್ರೀ | | | |
| 1 | ವನಜಾಕ್ಷಮ್ಮ, ಪತ್ರಾಂಕಿತ ವ್ಯವಸ್ಥಾಪಕರು ಬಿ.ಇ.ಓ. ಕಛೇರಿ, ಕೆ.ಜಿ.ಎಫ್. ಕೋಲಾರ ಜಿಲ್ಲೆ | 2.1.1946 | 31.1.2004 | |
| 2 | ಹೆಚ್.ಬಿ. ಜಗದವರ್, ಪತ್ರಾಂಕಿತ ವ್ಯವಸ್ಥಾಪಕರು ಬಿ.ಇ.ಓ. ಕಛೇರಿ, ಗದಗ್‌ನಗರ, ಗದಗ ಜಿಲ್ಲೆ | 1.3.1946 | 29.2.2004 | |
| 3 | ಎಸ್.ಪಿ. ಹೇಮಗಿರಿಮಠ, ಪತ್ರಾಂಕಿತ ಸಹಾಯಕರು, ಉಪನಿರ್ದೇಶಕರ ಕಛೇರಿ, ಸಾ.ಶಿ.ಇ. ತುಮಕೂರು | 30.3.1946 | 31.3.2004 | |
| 4 | ಎ.ಡಿ. ಶಿರಹಟ್ಟಿ, ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ ಕಛೇರಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ | 3.4.1946 | 30.4.2004 | |
| 5 | ಸಾಧು ತುಕಾರಾಂ, ಪತ್ರಾಂಕಿತ ಸಹಾಯಕರು, ಉಪನಿರ್ದೇಶಕರ ಕಛೇರಿ, ಸಾ.ಶಿ.ಇ. ಬಳ್ಳಾರಿ | 14.4.1946 | 30.4.2004 | |
| 6 | ಎ. ರಾಜ್‌ಕುಮಾರ್, ಪತ್ರಾಂಕಿತ ವ್ಯವಸ್ಥಾಪಕರು, ಕಾರ್ಯದರ್ಶಿಗಳು, ಪ್ರಾಂತೀಯ ಕ.ಪ್ರೌ.ಶಿ. ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರ ಕಛೇರಿ, ಮೈಸೂರು ವಿಭಾಗ, ಮೈಸೂರು | 19.4.1946 | 30.4.2004 | |
| 7 | ಪ್ರೇಮಾ ವಿ. ಶೇಟ್, ಪತ್ರಾಂಕಿತ ವ್ಯವಸ್ಥಾಪಕರು ಬಿ.ಇ.ಓ. ಕಛೇರಿ, ಉಡುಪಿ ಉತ್ತರವಲಯ, ಉಡುಪಿ ಜಿಲ್ಲೆ | 23.5.1946 | 31.5.2004 | |
| 8 | ಕೆ. ಶಾಂತರಾಜ್ ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ. ಕಛೇರಿ, ದಾವಣಗೆರೆ ದಕ್ಷಿಣ ವಲಯ, ದಾವಣಗೆರೆ ಜಿಲ್ಲೆ | 5.6.1946 | 30.6.2004 | |

| ಕ್ರಮ ಸಂಖ್ಯೆ | ಹೆಸರು, ಪದನಾಮ ಮತ್ತು ಸ್ಥಳ | ಜನ್ಮ ದಿನಾಂಕ | ನಿವೃತ್ತಿ ದಿನಾಂಕ | ಷರಾ |
|---|---|---|---|---|
| 9 | ಜಿ.ಎಸ್. ದೇವೇಂದ್ರನಾಥ್, ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ. ಕಛೇರಿ, ಬಾಗೇಪಲ್ಲಿ, ಚಿಕ್ಕಬಳ್ಳಾಪುರ ಶೈಕ್ಷಣಿಕ ಜಿಲ್ಲೆ, ಕೋಲಾರ ಜಿಲ್ಲೆ | 30.6.1946 | 30.6.2004 | ಇಲಾಖಾ ವಿಚಾರಣೆ ಬಾಕಿ ಇದೆ |
| 10 | ಶ್ರೀರಾಮುಲು, ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ. ಕಛೇರಿ, ಹೊಸಕೋಟೆ ತಾ: ಬೆಂಗಳೂರು ಗ್ರಾಮಾಂತರ ಜಿಲ್ಲೆ | 1.7.1946 | 30.6.2004 | |
| 11 | ಹೆಚ್. ಹನುಮಯ್ಯ, ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ. ಕಛೇರಿ, ಹೆಗ್ಗಡದೇವನಕೋಟೆ, ಮೈಸೂರು ಜಿಲ್ಲೆ | 10.8.1946 | 31.8.2004 | |
| 12 | ಎಂ.ಎಸ್. ಶಿರನಾಳ, ಪತ್ರಾಂಕಿತ ವ್ಯವಸ್ಥಾಪಕರು, ಬಿ.ಇ.ಓ. ಕಛೇರಿ, ಮುದ್ದೇಬಿಹಾಳ ತಾ: ವಿಜಾಪುರ ಜಿಲ್ಲೆ | 25.8.1946 | 31.8.2004 | |
| 13 | ಎನ್.ಎಸ್. ಹಳ್ಳಿ, ಪತ್ರಾಂಕಿತ ಸಹಾಯಕರು, ಉಪನಿರ್ದೇಶಕರ ಕಛೇರಿ, ಸಾ.ಶಿ. ಇಲಾಖೆ, ಚಿಕ್ಕಮಗಳೂರು ಜಿಲ್ಲೆ | 3.12.1946 | 31.12.2004 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1413

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. (ಸೇವೆಗಳು 1, 2)

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕವಿಪ:ಆ-1:28:ಮಹುಬ:2003/2026, ಬೆಂಗಳೂರು, ದಿನಾಂಕ: 4ನೇ ಡಿಸೆಂಬರ್ 2003**

ಶ್ರೀ ಐ.ಎಂ. ದಫೇದಾರ್ ಡಿ.ವೈ.ಎಸ್.ಪಿ. ಡಿ.ಎ.ಆರ್. ಬೀದರ್ ಜಿಲ್ಲೆ, ಇವರನ್ನು ಅವರದೇ ಆದ ವೇತನ ಹಾಗೂ ವೇತನ ಶ್ರೇಣಿಯಲ್ಲಿ ಜೊತೆಗೆ ಲಭ್ಯವಿರುವ ವಿಶೇಷ ವೇತನದೊಂದಿಗೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರವರ ಕಚೇರಿಯ ಸಹಮತಿಯ ಚಲನಾ ಆದೇಶ ಸಂಖ್ಯೆ: ಸಿಬಿ1:294:98-99, ದಿನಾಂಕ: 28.11.2003 ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ನಿಯೋಜನೆಯ ಆಧಾರದ ಮೇಲೆ ಕರ್ನಾಟಕ ವಿಧಾನ ಪರಿಷತ್ತಿನ ದಂಡನಾಯಕರಾಗಿ ನೇಮಕ ಮಾಡಲಾಗಿದೆ.

ಸಭಾಪತಿಯವರ ಆದೇಶದ ಮೇರೆಗೆ,

ಪಿ.ಆರ್. 1414

**ಬಿ.ಎನ್. ಪ್ರಸಾದ್**

ಅಧೀನ ಕಾರ್ಯದರ್ಶಿ,

ಕರ್ನಾಟಕ ವಿಧಾನ ಪರಿಷತ್ತು.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಂಕಇ 782 ಕಸಧ 2003, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2003**

ಶ್ರೀ ಪ್ರಸನ್ನ ನಿರ್ದೇಶಕರು, ನಾಟಕ ಕರ್ನಾಟಕ ರಂಗಾಯಣ, ಮೈಸೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇವರ ಕರ್ತವ್ಯದಿಂದ ಬಿಡುಗಡೆ ಮಾಡಲಾಗಿದೆ.

ಶ್ರೀ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಇವರನ್ನು ಇವರ ಕರ್ತವ್ಯದ ಜೊತೆಗೆ ಮೈಸೂರಿನ ನಾಟಕ ಕರ್ನಾಟಕ ರಂಗಾಯಣದ ನಿರ್ದೇಶಕರಾಗಿ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೆಚ್ಚಿನ ಪ್ರಭಾರದಲ್ಲಿ ಇರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1415

**ಟಿ.ಕೆ. ರಾಮಚಂದ್ರ**

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಆಕುಕ 97 ಎಂಸಿಎಲ್ 2003, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2003

1977ರ ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನ್) ನಿಯಮಾವಳಿಯ 5(1)(ಎ) ನಿಯಮದಡಿ ಬೆಂಗಳೂರು ವೈದ್ಯಕೀಯ ಕಾಲೇಜಿನ ಈ ಕೆಳಕಂಡ ನರರೋಗಶಾಸ್ತ್ರ ಉಪನ್ಯಾಸಕರ ಪ್ರೊಬೆಷನ್ ಅವಧಿಯನ್ನು ಅವರ ಹೆಸರಿನ ಮುಂದೆ ಸೂಚಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ತೃಪ್ತಿಕರವಾಗಿ ಪೂರೈಸಿದ್ದಾರೆ ಎಂದು ಘೋಷಿಸಲಾಗಿದೆ.

| ಕ್ರ.ಸಂ. | ವೈದ್ಯರ ಹೆಸರು | ಸೇವೆಗೆ ಸೇರಿದ ದಿನಾಂಕ | ಪ್ರೊಬೆಷನ್ ಅವಧಿ ಪೂರೈಸಿದ ದಿನಾಂಕ |
|---|---|---|---|
| 1 | ಡಾ: ಎಂ. ದಿವ್ಯಪ್ರಕಾಶ್ | 3.8.2000 | 3.8.2002 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1416

**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ)

### ಅಧಿಸೂಚನೆ

### ಸಂಖ್ಯೆ: ಆಕುಕ 112 ಎಂಎಂಸಿ 2002, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2003

1) 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ 10(5)(ಸಿ) ನಿಯಮದಡಿ ಮೈಸೂರು ವೈದ್ಯಕೀಯ ಕಾಲೇಜಿನ ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರ ಪ್ರಾಧ್ಯಾಪಕ ಹಾಗೂ ಈಗ ಹಾಲಿ ತಾ: 24.5.2002 ಸಂಖ್ಯೆ: ಆಕುಕ 112 ಎಂಎಂಸಿ 2002ರ ಸರ್ಕಾರಿ ಆದೇಶದಂತೆ ಸೇವೆಯಿಂದ ಅಮಾನತ್ತಿನಲ್ಲಿರುವ ಡಾ: ಸೋಮೇಗೌಡ ರವರ ಅಮಾನತ್ತನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಲಾಗಿದೆ. ಮತ್ತು ಅವರನ್ನು ಅವರ ವಿರುದ್ಧದ ನ್ಯಾಯಾಂಗ ವಿಚಾರಣೆ ಹಾಗೂ ಇಲಾಖಾ ವಿಚಾರಣೆ ಬಾಕಿ ಇಟ್ಟು ಬಳ್ಳಾರಿಯ ವಿಜಯನಗರ ವೈದ್ಯಕೀಯ ವಿಜ್ಞಾನ ಸಂಸ್ಥೆಯಲ್ಲಿ ಖಾಲಿ ಇರುವ ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯಲ್ಲಿ ನಿಯೋಜನೆ ಮೇಲೆ ನೇಮಿಸಲಾಗಿದೆ.

2) ಡಾ: ಸೋಮೇಗೌಡರವರ ನಿಯೋಜನಾ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1417

**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ)

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 140 SFP 2003, Bangalore, Dated 1st December 2003

Sri Indu B. Srivastava, IFS., (KN-75), Chief Conservator of Forests, (Personnel & Administration), Bangalore, is promoted to officiate in the rank of Additional Principal Chief Conservator of Forests, carrying the above Super Time Scale of pay of IFS viz Rs. 22400-525-24500 with immediate effect and he is continued until further orders as Additional Principal Chief Conservator of Forests (Personnel & Administration) Bangalore, in the upgraded post.

Sri S. Nagaraja, IFS (KN-75) Chief Conservator of Forests (Working Plan, Forest Research & Training), Bangalore is promoted to officiate in the rank of Additional Principal Chief Conservator of Forests, carrying the above Super Time Scale of pay of IFS viz Rs. 22400-525-24500 with immediate effect and he is continued until further orders as Additional Principal Chief Conservator of Forests, (Working Plan, Forests Research and Training), Bangalore, in the upgraded post.

By order and in the name of the Governor of Karnataka,

PR-1418

**B.V. Kumaraswamy**
Under Secretary to Government,
DPAR (Services-I).

## HIGH COURT OF KARNATAKA

### NOTIFICATION

### No. GOB(I) 335/2003, Bangalore, Dated 18th November 2003

In exercise of the powers conferred by sub-section (1) of Section 22 of the Karnataka Civil Courts Act, 1964 (Karnataka Act No. 21 of 1964), the High Court of Karnataka hereby invests with immediate

effect, the Courts of the Civil Judges mentioned in column 2 of the table below, with jurisdiction of a Court of Small Causes, within the limits of Taluk/s mentioned in column 3 of the table below for the trial of suits of the value of Rs. 3001/- (Rupees three thousand and one only) and above upto and not exeeding Rs. 25,000/- (Rupees twenty five thousand only) cognisable by such Courts.

**TABLE**

| Sl.No. | Name of the Court | Name of the Taluk in respect of which the Small Causes Jurisdiction is conferred |
|---|---|---|
| 1 | 2 | 3 |
| 1 | The Civil Judge (Sr.Dn.), Hukkeri | Hukkeri |
| 2 | The Civil Judge (Sr.Dn.), Basavanabagewadi | Basavanabagewadi |

By order of the High Court,

PR-1419

**N. Ananda**

Registrar General.

## LAW SECRETARIAT

## NOTIFICATION

**No. LAW 191 LAC 2003, Bangalore, Dated 29th November 2003**

In exercise of the powers conferred under section 4 of the Family Courts Act, 1984 (Central Act No. 66 of 1984) and in accordance with the recommendations made by the High Court of Karnataka, the Government of Karnataka, hereby appoints the Ist Additional Judge, Family Court, Bangalore concurrently to act as the Presiding Officer of the Court of IInd Additional Judge, Family Court, Bangalore with immediate effect until further orders.

By order and in the name of the Governor of Karnataka,

PR-1420

**Chikkahanumanthaiah**

Under Secretary to Government,

Law Department (Admn-1).

## OFFICE OF THE KARNATAKA LAW REPORTING COUNCIL

## NOTIFICATION

**No. LRC 28/1991, Bangalore, Dated 17th November 2003**

In exercise of the powers conferred by sub-rule 1(b) and 1(c) of Rule-3 of the Karnataka Law Reports Rules, 1983, the Hon'ble Chief Justice, High Court of Karnataka, Bangalore is pleased to extend the term of Sriyuths T.R. Subbanna, S.S. Ramdas and B.R. Nanjundaiah, Senior Advocates, as Members of Karnataka Law Reporting Council for a further period of one year with effect from 9-11-2003.

By order of the Hon'ble Chief Justice- Chairman

PR-1421

Karnataka Law Reporting Council,

**N. Ananda**

Secretary.

## HIGH COURT OF KARNATAKA

## NOTIFICATION

**No. GOB(1) 1/2003, Bangalore, Dated 5th December 2003**

The Presiding Officer of the Court of II Addl. District and Sessions Judge, Mysore, is concurrently appointed as the Presiding Officer of the Court of III Addl. District and Sessions Judge, Mysore, with immediate effect and until further orders.

By order of the High Court,

PR-1422

**N. Ananda**

Registrar General.

## HIGH COURT OF KARNATAKA

## NOTIFICATION

**No. GOB(1) 1/2003, Bangalore, Dated 1st December 2003**

The Presiding Officer of the Court of XXX Addl. City Civil and Sessions Judge, Bangalore City, is concurrently appointed as the Presiding Officer of the Court of XVI Addl. City Civil and Sessions Judge, Bangalore City, with effect from the date of relief of Sri A.M. Bennur and until further orders.

By order of the High Court,

PR-1423

**N. Ananda**

Registrar General.